

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 12 (49) |
| ಮಾನ್ಯ ಸದಸ್ಯರ ಹೆಸರು | ಶ್ರೀ ಅರವಿಂದ ಕುಮಾರ್ ಅರಳಿ<br>(ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 02-03-2020 |
| ಉತ್ತರಿಸಬೇಕಾದ ಸಚಿವರು | ವೈದ್ಯಕೀಯ ಶಿಕ್ಷಣ ಸಚಿವರು |

| ಕ್ರ. ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| (ಅ) | ಬೀದರ್ ನ ಬ್ರಿಮ್ಸ್ ಮಹಾವಿದ್ಯಾಲಯದಲ್ಲಿ ನಡೆದಿದೆ ಎನ್ನಲಾದ ಸುಮಾರು 18.00 ಕೋಟಿ ರೂಪಾಯಿ ಅವ್ಯವಹಾರ ಸರ್ಕಾರದ ಗಮನಕ್ಕೆ ಬಂದಿದೆಯೇ;ಬಂದಿದ್ದಲ್ಲಿ, ಈ ಬಗ್ಗೆ ಯಾವ ಕ್ರಮ ಕೈಗೊಳ್ಳಲಾಗಿದೆ; | ಬೀದರ್ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಬಿದರ್ ಇಲ್ಲಿ ಖರೀದಿ, ಸಿಬ್ಬಂದಿ ನೇಮಕ ಮತ್ತು ಇತರೆ ಕಾಮಗಾರಿ/ಖರೀದಿಗಳಲ್ಲಿ ಹಣದ ದುರುಪಯೋಗ ಹಾಗೂ ಅವ್ಯವಹಾರ ನಡೆದಿರುವುದಾಗಿ ಭ್ರಷ್ಟಾಚಾರ ನಿಗ್ರಹದಳದಿಂದ ಸರ್ಕಾರದಲ್ಲಿ ಸ್ವೀಕೃತವಾದ ದೂರಿನನ್ವಯ ಸರ್ಕಾರದ ಆದೇಶ ಸಂಖ್ಯೆ:ಆಕುಕ 122 ಎಂಎಸ್‌ಎಫ್ 2018, ದಿನಾಂಕ:29-06-2018 ರಲ್ಲಿ ಈ ಕೆಳಕಂಡ ಸಿಬ್ಬಂದಿಗಳ ವಿರುದ್ಧ ಮೊಕದ್ದಮೆ ದಾಖಲಿಸಿ ತನಿಖೆ ಕೈಗೊಳ್ಳಲು ಭ್ರಷ್ಟಾಚಾರ ನಿಗ್ರಹದಳಕ್ಕೆ ಅಭಿಯೋಜನಾ ಮಂಜೂರಾತಿ ನೀಡಲಾಗಿರುತ್ತದೆ.<br><br>1. ಡಾ:ಚನ್ನಣ್ಣ ಸಿ, ಹಿಂದಿನ ನಿರ್ದೇಶಕರು.<br>2. ಡಾ: ಶಿವಕುಮಾರ್ ಶೆಟಕಾರ, ಹಿಂದಿನ ವೈದ್ಯಕೀಯ ಅಧೀಕ್ಷಕರು .<br>3. ಶ್ರೀ ಆನಂದಸಾಗರ ರೆಡ್ಡಿ, ಹಿಂದಿನ ಸಿ.ಇ.ಓ.<br>4.ಶ್ರೀಮತಿ ಅನಸೂಯ, ಸಹಾಯಕ ಆಡಳಿತಾಧಿಕಾರಿಗಳು<br>5. ಶ್ರೀ ಬಾಬು ಕೋಟೆ, ಕಛೇರಿ ಅಧೀಕ್ಷಕರು.<br>6. ಶ್ರೀ ಪ್ರಕಾಶ ಶರಣಪ್ಪ ಮಡಿವಾಳ, ಕಛೇರಿ ಅಧೀಕ್ಷಕರು<br>7. ಶ್ರೀ ಪ್ರಕಾಶ ಮಾಳಗೆ, ಪ್ರ.ದ.ಸ<br>8. ಶ್ರೀಮತಿ ವರ್ಷ ದೇಶಮುಖ್.ಪ್ರ.ದ.ಸ<br>9. ಶ್ರೀ ಮಾಚೆ ಕಲ್ಲಪ್ಪ, ನಿವೃತ್ತ ಕಛೇರಿ ಅಧೀಕ್ಷಕರು<br>10. ಶ್ರೀ ಶಿವಾಜಿ, ದ್ವಿ.ದ.ಸ. |
| (ಆ) | ಬೀದರ್ ಬ್ರಿಮ್ಸ್ ನಲ್ಲಿ ನಡೆದ ಅವ್ಯವಹಾರಕ್ಕೆ ಕಾರಣರಾದವರು ಎನ್ನಲಾದ ಎರವಲು ಬಂದ ಗುಮಾಸ್ತರ ವಿರುದ್ಧ ಸರ್ಕಾರ ತೆಗೆದುಕೊಂಡ ಕ್ರಮ ಏನು; ಈ ಎರವಲು ಬಂದ ಗುಮಾಸ್ತರು ಅದೇ ಸ್ಥಳದಲ್ಲಿ ಮುಂದುವರೆದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರದ ನಿಲುವು ಏನು; | ಶ್ರೀ ನಿಶ್ಚಿತ್ ವಿ.ಡಿ. ಆರ್ಥಿಕ ಸಲಹೆಗಾರರು, ಕಿದ್ವಾಯಿ ಸ್ಮಾರಕ ಗಂಥಿ ಸಂಸ್ಥೆ, ಬೆಂಗಳೂರು ಇವರನ್ನು ದಿನಾಂಕ: 19/02/2018ನ ರಂದು ಬ್ರಿಮ್ಸ್ ಸಂಸ್ಥೆಯಲ್ಲಿ ಲಿಪಿಕ ಸಿಬ್ಬಂದಿಗಳಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಪ್ರಕಾಶ ಎಸ್, ಮತ್ತು ಶ್ರೀ ಪ್ರಕಾಶ ಮಾಳಗೆ ರವರು ಮಾಡಿರುವ ಅವ್ಯವಹಾರದ ಬಗ್ಗೆ ತನಿಖೆ ಕೈಗೊಳ್ಳಲು ಆದೇಶಿಸಿದ್ದು, ಸದರಿ ತನಿಖಾಧಿಕಾರಿಯು ದಿನಾಂಕ:24/04/2018 ಮತ್ತು 24/04/2018 ರಂದು ಬ್ರಿಮ್ಸ ಬೀದರ್ ಗೆ ಖುದ್ದಾಗಿ ಭೇಟಿ ನೀಡಿ ದಾಖಲೆಗಳನ್ನು ಪರಿಶೀಲಿಸಿ ತನಿಖೆ ಕೈಗೊಂಡು ದಿನಾಂಕ: 19/06/2018 ರಂದು ಸರ್ಕಾರಕ್ಕೆ ತನಿಖಾ ವರದಿ ಸಲ್ಲಿಸಿರುತ್ತಾರೆ. ಇದನ್ನು ಪರಿಶೀಲಿಸಿ ಸರ್ಕಾರವು ದಿನಾಂಕ: 04/08/2018 ರಂದು ಈ ಕೆಳಕಂಡ ಆರೋಪಿತ ಅಧಿಕಾರಿ/ನೌಕರರಿಗೆ ದೋಷಾರೋಪಣಾ ಪಟ್ಟಿ ಜಾರಿ ಮಾಡಲಾಗಿದೆ. |
| (ಇ) | ಬೀದರ್ ಬ್ರಿಮ್ಸ್ ನಲ್ಲಿ ನಡೆದಿದೆ ಎನ್ನಲಾದ ಸುಮಾರು 18.00 ಕೋಟಿ ರೂಪಾಯಿ ತನಿಖೆ ಎ.ಸಿ.ಬಿ. ಬೀದರ್ ಗೆ ವಹಿಸಲಾಗಿದ್ದರೂ ಇದುವರೆಗೆ ಏಕೆ ಕಾರ್ಯಪ್ರವೃತ್ತರಾಗಿಲ್ಲ; ಅದಕ್ಕಾಗಿ ಸರ್ಕಾರ ತೆಗೆದುಕೊಂಡ ಕ್ರಮಗಳಾವುವು; | |

| ಕ್ರ.ಸಂ | ಅಧಿಕಾರಿ/ಸಿಬ್ಬಂದಿ ಹೆಸರು |
|---|---|
| 1 | ಡಾ:ಸಿ ಚನ್ನಣ್ಣ- ನಿರ್ದೇಶಕರು |
| 2 | ಶ್ರೀ ಆನಂದಸಾಗರ ರೆಡ್ಡಿ, ಮುಖ್ಯ ಆಡಳಿತಾಧಿಕಾರಿ |
| 3 | ಡಾ:ಶಿವಕುಮಾರ್ ಶೆಟಕಾರ, ಹಿಂದಿನ ವೈದ್ಯ ಅಧೀಕ್ಷಕರು |
| 4 | ಶ್ರೀಮತಿ ಅನಸೂಯ ,ಸಹಾಯಕ ಆಡಳಿತಾಧಿಕಾರಿ |
| 5 | ಶ್ರೀ ಪ್ರಕಾಶ ಶರಣಪ್ಪಾ ಮಡಿವಾಳ ,ಕಛೇರಿ ಅಧೀಕ್ಷಕರು |
| 6 | ಶ್ರೀ ಬಾಬು ಕೋಟೆ- ಕಛೇರಿ ಅಧಿಕ್ಷಕರು |
| 7 | ಶ್ರೀ ಪ್ರಕಾಶ ಮಾಳಗೆ- ಪ್ರಥಮ ದರ್ಜೆ ಸಹಾಯಕರು |
| 8 | ಶ್ರೀಮತಿ ವರ್ಷಾ, ಪ್ರಥಮ ದರ್ಜೆ ಸಹಾಯಕರು |

ಆರೋಪಿತ ಅಧಿಕಾರಿ ಮತ್ತು ಸಿಬ್ಬಂದಿಗಳ ವಿರುದ್ಧ ದೋಷಾರೋಪಣ ಪಟ್ಟಿ ಹೊರಡಿಸಲಾಗಿದ್ದು, ದೋಷಾರೋಪಣೆಗೆ ಸಂಬಂಧಿಸಿದಂತೆ ಸಲ್ಲಿಸಿರುವ ಸಮಜಾಷಿಯನ್ನು ಪರಿಶೀಲಿಸಲಾಗುತ್ತಿದೆ. ವೈದ್ಯಕೀಯ ಶಿಕ್ಷಣ ಇಲಾಖೆಯನ್ನು ಹೊರತುಪಡಿಸಿದ ಅಧಿಕಾರಿ ಮತ್ತು ಸಿಬ್ಬಂದಿಗಳ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಸದರಿಯವರುಗಳ ಮಾತೃ ಇಲಾಖೆಗಳಾದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಮತ್ತು ಯೋಜನಾ ಇಲಾಖೆಯ ಸಹಮತಿ ಕೋರಿ ದಿನಾಂಕ: 28.01.12019 ರಂದು ಪ್ರತವನ್ನು ಬರೆಯಲಾಗಿದೆ.

ಈ ಪ್ರಕರಣದ ಕುರಿತು ತನಿಖೆ ನಡೆಸಲು ಅಭಿಯೋಜನಾ ಮಂಜೂರಾತಿ ನೀಡಿ ಹೊರಡಿಸಲಾದ ಸರ್ಕಾರದ ಆದೇಶ ಸಂಖ್ಯೆ:ಆಕುಕ 122 ಎಂಎಸ್ಎಫ್ 2018 ದಿನಾಂಕ: 29.06.2018 ಕ್ಕೆ ಮಾನ್ಯ ಉಚ್ಚ ನ್ಯಾಯಾಲಯವು ತಡೆಯಾಜ್ಞೆ ನೀಡಿರುತ್ತದೆ. ಆದಾಗ್ಯೂ, ಕ್ರಮ ಸಂಖ್ಯೆ:03 ರಿಂದ 10 ರ ವರೆಗಿನ ಅಧಿಕಾರಿ/ ಸಿಬ್ಬಂದಿಗಳ ವಿರುದ್ಧ ಭ್ರಷ್ಟಾಚಾರ ನಿಗ್ರಹದಳದಿಂದ ಪ್ರಥಮ ವರ್ತಮಾನ ವರದಿಯನ್ನು ದಾಖಲಿಸಲಾಗಿರುತ್ತದೆ. ಈ ಬಗ್ಗೆ ಬೆಂಗಳೂರು ಹಾಗೂ ಕಲಬುರ್ಗಿ ನ್ಯಾಯಾಲಯದಲ್ಲಿ ದಾವೆ ಹೂಡಲಾಗಿದ್ದು ಮಧ್ಯಂತರ ತಡೆಯಾಜ್ಞೆ ನೀಡಿದೆ. ತಡೆಯಾಜ್ಞೆ ತೆರವುಗೊಳಿಸಲು ಕ್ರಮಕೈಗೊಳ್ಳಲಾಗಿದೆ.

ಹಾಗೂ ಸಂಸ್ಥೆಯ ಹಿಂದಿನ ನಿರ್ದೇಶಕರಾದ ಡಾ:ಸಿ ಚನ್ನಣ್ಣ ಇವರನ್ನು ಮಾತೃ ಸಂಸ್ಥೆಯಾದ ವಿಜಯನಗರ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಗೆ ಹಿಂದಿರುಗಿಸಲಾಗಿದೆ.

ಸಂಸ್ಥೆಯ ಹಿಂದಿನ ಮುಖ್ಯ ಆಡಳಿತಾಧಿಕಾರಿಯಾಗಿದ್ದ ಶ್ರೀ ಆನಂದಸಾಗರ ರೆಡ್ಡಿ ಇವರು ವಯೋನಿವೃತ್ತಿ ಹೊಂದಿದ್ದು, ಸದರಿಯವರ ವಿರುದ್ಧ ವಿಚಾರಣೆ ಕೈಗೊಳ್ಳಲು ಮಾತೃ ಇಲಾಖೆಯ ಸಹಮತಿ ಕೋರಲಾಗಿದೆ. .

ಇನ್ನುಳಿದಂತೆ, ಈ ಕೆಳಕಂಡ ನೌಕರರುಗಳು ಮೂಲತಃ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ನೌಕರರಾಗಿದ್ದು ಇವರುಗಳನ್ನು ಮಾತೃ ಇಲಾಖೆಗೆ ಹಿಂದಿರುಗಿಸಲಾಗಿದೆ.

| ಕ್ರ.ಸಂ | ಸಿಬ್ಬಂದಿ ಹೆಸರು | ಪದನಾಮ |
|---|---|---|
| 1 | ಶ್ರೀಮತಿ ಅನಸೂಯ | ಸಹಾಯಕ ಆಡಳಿತಾಧಿಕಾರಿ |
| 2 | ಶ್ರೀ ಪ್ರಕಾಶ ಶರಣಪ್ಪ ಮಡಿವಾಳ | ಕಛೇರಿ ಅಧೀಕ್ಷಕರು |
| 3 | ಶ್ರೀ ಬಾಬು ಕೋಟಿ | ಕಛೇರಿ ಅಧೀಕ್ಷಕರು |
| 4 | ಶ್ರೀ ಪ್ರಕಾಶ ಮಾಳಗೆ | ಪ್ರಥಮ ದರ್ಜೆ ಸಹಾಯಕರು |

ಆದರೆ, ಶ್ರೀ ಪ್ರಕಾಶ ಶರಣಪ್ಪ ಮಡಿವಾಳ ಮತ್ತು ಶ್ರೀ ಪ್ರಕಾಶ ಮಾಳಗೆ ಇವರುಗಳ ಮಾನ್ಯ ಉಚ್ಚ ನ್ಯಾಯಾಲಯ, ಕಲಬುರ್ಗಿ ಪೀಠ ಇಲ್ಲಿ ದಾವೆ ಹೂಡಿದ್ದು, ಸಂಸ್ಥೆಯ ಕರ್ತವ್ಯದಲ್ಲಿ ಮುಂದುವರೆದಿರುತ್ತಾರೆ. ಮಾನ್ಯ ನ್ಯಾಯಾಲಯವು ನೀಡಿರುವ ತಡೆಯಾಜ್ಞೆಯನ್ನು ತೆರವುಗೊಳಿಸಲು ಕ್ರಮಕೈಗೊಳ್ಳಲಾಗುತ್ತಿದೆ.

ಹಾಗೂ ಶ್ರೀ ಪ್ರಕಾಶ ಶರಣಪ್ಪ ಮಡಿವಾಳ ಮತ್ತು ಶ್ರೀ ಪ್ರಕಾಶ ಮಾಳಗೆ ಅವರುಗಳ ಕಾರ್ಯನಿರ್ವಹಿಸುತ್ತಿದ್ದ ಶಾಖೆಯಿಂದ ಹಣಕಾಸಿನ ವ್ಯವಹಾರವಿಲ್ಲದ ಶಾಖೆಗಳಿಗೆ ಆಂತರಿಕ ಬದಲಾವಣೆ ಮಾಡಲಾಗಿರುತ್ತದೆ.

**ಎಂಇಡಿ 72 ಎಂ ಎಸ್ ಎಫ್ 2020**

(ಡಾ: ಕೆ. ಸುಧಾಕರ್)
ವೈದ್ಯಕೀಯ ಶಿಕ್ಷಣ ಸಚಿವರು.